# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1560

ಉತ್ತರ ದಿನಾಂಕ : 11.03.2022

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಂತರ್ಜಲದಲ್ಲಿ ಯುರೇನಿಯಂ ಪ್ರಮಾಣ ಸುರಕ್ಷತೆಯ ಮಿತಿ ದಾಟಿರುವ ಪ್ರಕರಣಗಳು ಕರ್ನಾಟಕದ ಯಾವ ಭಾಗಗಳಲ್ಲಿ ಕಂಡು ಬಂದಿವೆ;(ಜಿಲ್ಲಾವಾರು ವಿವರ ನೀಡುವುದು) | ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರಿನ ದಿವೇಚಾ ಹವಾಮಾನ ಬದಲಾವಣೆ ಅಧ್ಯಯನ ಕೇಂದ್ರರವರ ವರದಿಯ ಪ್ರಕಾರ ಅಂತರ್ಜಲದಲ್ಲಿ ಯುರೇನಿಯಂ ಪ್ರಮಾಣ ಸುರಕ್ಷತೆಯ ಮಿತಿ ದಾಟಿರುವ ಪ್ರಕರಣಗಳು ಪೂರ್ವ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಕಂಡು ಬಂದಿರುತ್ತದೆ. ಜಿಲ್ಲಾವಾರು ವಿವರಗಳನ್ನು **ಅನುಬಂಧದಲ್ಲಿ** ಲಗತ್ತಿಸಿದೆ. |
| ಆ) | ಅಂತರ್ಜಲದಲ್ಲಿ ಯುರೇನಿಯಂ ಪ್ರಮಾಣ ಸುರಕ್ಷತೆಯ ಮಿತಿ ದಾಟಿದಲ್ಲಿ ಅಂತಹ ನೀರನ್ನು ಬಳಸಲು ಯೋಗ್ಯವೇ; ಇಂತಹ ನೀರಿನ ಬಳಕೆಯಿಂದ ಉಂಟಾಗುವ ಪರಿಣಾಮಗಳೇನು; (ವಿವರ ನೀಡುವುದು) | ಅಂತರ್ಜಲದಲ್ಲಿ ಯುರೇನಿಯಂ ಅಂಶದ ಪ್ರಮಾಣವು ಸುರಕ್ಷತೆಯ ಮಿತಿ ದಾಟಿದ ನೀರು ಬಳಸಲು ಯೋಗ್ಯವಾಗಿರುವುದಿಲ್ಲ.<br>ವಿವಿಧ ಅಧ್ಯಯನಗಳು ಬಹಿರಂಗಪಡಿಸಿರುವ ವರದಿಗಳ ಪ್ರಕಾರ, ಕುಡಿಯುವ ನೀರಿನಲ್ಲಿ ಯುರೇನಿಯಂ ಅಂಶವು ನಿಗಧಿತ ಮಟ್ಟಕ್ಕಿಂತ ಹೆಚ್ಚಾಗಿದ್ದರೆ ಮೂತ್ರಪಿಂಡದ (Nephritis) ಹಾನಿಗೆ ಕಾರಣವಾಗುತ್ತದೆ. |
| ಇ) | ಯಾವ ಕಾರಣಗಳಿಂದ ಯುರೇನಿಯಂ ಅಂತರ್ಜಲಕ್ಕೆ ಸೇರುತ್ತಿದೆ ಮತ್ತು ಇಂತಹ ನೀರನ್ನು ಬಳಸುವುದರಿಂದ ಆಗಬಹುದಾದದ ತೊಂದರೆಗಳ ಬಗ್ಗೆ ಸಾರ್ವಜನಿಕರಿಗೆ ಅರಿವು ಮೂಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಯುರೇನಿಯಂ ಅಂಶವು ವಿವಿಧ ರೀತಿಯ ಮಣ್ಣು ಮತ್ತು ಬಂಡೆಗಳಲ್ಲಿ ವಿಶೇಷವಾಗಿ ಗ್ರಾನೈಟ್ ಶಿಲೆಗಳಲ್ಲಿ ಕಂಡು ಬರುವಂತಹ ಅಂಶವಾಗಿದ್ದು, ಮಳೆಗಾಲದಲ್ಲಿ ಗ್ರಾನೈಟ್ ಬಂಡೆಗಳ ಸವಕಳಿಯಿಂದ ಯುರೇನಿಯಂ ಅಂಶವು ಅಂತರ್ಜಲವನ್ನು ಸೇರುತ್ತದೆ.<br>ಯುರೇನಿಯಂ ಅಂಶವು ನಿಗದಿತ ಮಟ್ಟಕ್ಕಿಂತ ಹೆಚ್ಚಾಗಿರುವ ನೀರಿನ ಮೂಲಗಳಿಂದ ಕುಡಿಯಲು ನೀರನ್ನು ಬಳಸದಂತೆ ಹಾಗೂ ಅಂತಹ ಗ್ರಾಮಗಳಲ್ಲಿ ಅಳವಡಿಸಿರುವ ಶುದ್ಧ ಕುಡಿಯುವ ನೀರಿನ ಘಟಕಗಳಿಂದ ಶುದ್ಧೀಕರಿಸಿದ ನೀರನ್ನೇ ಕುಡಿಯಲು ಉಪಯೋಗಿಸುವಂತೆ ಗ್ರಾಮೀಣ ಜನರಲ್ಲಿ ಜಾಗೃತಿ ಮೂಡಿಸುವಂತೆ **ಅನುಬಂಧದಲ್ಲಿ** ತಿಳಿಸಿರುವ ಜಿಲ್ಲೆಗಳ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯಿಂದ ನಿರ್ದೇಶನ ನೀಡಲಾಗಿರುತ್ತದೆ.<br>ಇದಲ್ಲದೆ ಇಲಾಖೆಯಡಿಯಲ್ಲಿ ವಿವಿಧ ಮಾಹಿತಿ, ಶಿಕ್ಷಣ, ಸಂವಹನ (IEC) ಮತ್ತು ತರಬೇತಿ ಚಟುವಟಿಕೆಗಳನ್ನು ಅನುಷ್ಠಾನಗೊಳಿಸಲು ನೇಮಿಸಿಕೊಂಡಿರುವ ಅನುಷ್ಠಾನ ನೆರವು ಸಂಸ್ಥೆಗಳ ಮೂಲಕ ಯುರೇನಿಯಂ ಅಂಶವು ಕಂಡು ಬಂದಿರುವಂತಹ ಗ್ರಾಮಗಳಲ್ಲಿ ವ್ಯಾಪಕ ಜಾಗೃತಿ ಮೂಡಿಸಲು ಅಗತ್ಯ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿರುತ್ತದೆ. |

ಸಂ:ಗ್ರಾಕುನೀ&ನೈಇ 162 ಗ್ರಾನೀಸ(4)2022

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಚುಕ್ಕೆ ರಹಿತ ಪ್ರಶ್ನೆ ಸಂ: 1560 ಕೆ ಲಗತ್ತು

ಅನುಬಂಧ

**ಭಾರತೀಯ ವಿಜ್ಞಾನ ಸಂಸ್ಥೆ ಬೆಂಗಳೂರಿನ ದಿವೇಚಾ ಹವಾಮಾನ ಬದಲಾವಣೆ ಅಧ್ಯಯನ ಕೇಂದ್ರದ ವರದಿಯ ಪ್ರಕಾರ ಯುರೇನಿಯಂ ಪ್ರಮಾಣ ಸುರಕ್ಷತೆಯ ಮಿತಿ ದಾಟಿರುವ ಜಿಲ್ಲಾವಾರು ವಿವರಗಳು.**

| ಕ್ರ.ಸಂ | ಜಿಲ್ಲೆ | ತಾಲ್ಲೂಕು | ಗ್ರಾಮ |
|---|---|---|---|
| 1 | ಗುಲ್ಬರ್ಗಾ | ಚಿತ್ತಾಪುರ | ಚಿತ್ತಾಪುರ |
| 2 | ರಾಯಚೂರು | ಸಿಂಧನೂರು | ಹಂಚಿನಾಳ |
| 3 | ಕೊಪ್ಪಳ | ಕುಷ್ಟಗಿ | ಬೇವೂರು |
| 4 | ಕೊಪ್ಪಳ | ಕುಷ್ಟಗಿ | ಬೇವೂರು |
| 5 | ಕೊಪ್ಪಳ | ಕುಷ್ಟಗಿ | ನಿದಶೇಸಿ |
| 6 | ಬಳ್ಳಾರಿ | ಹೊಸಪೇಟೆ | ವೆಂಕಟಪುರ |
| 7 | ಬಳ್ಳಾರಿ | ಸಂಡೂರು | ಜೋಗಿಕಲ್ಲು |
| 8 | ಚಿತ್ರದುರ್ಗ | ಹೊಸದುರ್ಗ | ಗಲಿ ರಂಗಯ್ಯನಹಟ್ಟಿ |
| 9 | ಚಿತ್ರದುರ್ಗ | ಮೊಳಕಾಲ್ಮೂರು | ಕಾಡ ಸಿದ್ಧಾಪುರ |
| 10 | ತುಮಕೂರು | ಮಧುಗಿರಿ | ಬಡವನಹಳ್ಳಿ |
| 11 | ತುಮಕೂರು | ಮಧುಗಿರಿ | ಬಡವನಹಳ್ಳಿ |
| 12 | ತುಮಕೂರು | ಪಾವಗಡ | ಅರಳೀಕುಂಟೆ |
| 13 | ತುಮಕೂರು | ಪಾವಗಡ | ಕರಿಯಮ್ಮನಪಾಳ್ಯ |
| 14 | ತುಮಕೂರು | ಪಾವಗಡ | ಕೊಡಮಡಗು |
| 15 | ತುಮಕೂರು | ಪಾವಗಡ | ಕ್ಯಾತಗಾನಹಳ್ಳಿ |
| 16 | ತುಮಕೂರು | ಪಾವಗಡ | ಕ್ಯಾತಗಾನಹಳ್ಳಿ |
| 17 | ತುಮಕೂರು | ಶಿರಾ | ಗೋಮಾರನಹಳ್ಳಿ |
| 18 | ತುಮಕೂರು | ಶಿರಾ | ಕುಂಬಾರಹಳ್ಳಿ |
| 19 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಚಂಚುರಾಯನಪಲ್ಲಿ |
| 20 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಚಂಚುರಾಯನಪಲ್ಲಿ |
| 21 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಚಂಚುರಾಯನಪಲ್ಲಿ |
| 22 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಡಿ. ಕೊತ್ತಪಲ್ಲಿ |
| 23 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಮದ್ದಲಖಾನೆ |
| 24 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಮದ್ದೇಪಲ್ಲಿ |
| 25 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಪೋತೆಪಲ್ಲಿ |
| 26 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಸಜ್ಜಾಪಲ್ಲಿ |
| 27 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಸಕ್ಕವಂಡಲಪಲ್ಲಿ |
| 28 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ತಿಮ್ಮಮ್ಪಲ್ಲಿ |
| 29 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ತಿಮ್ಮಮ್ಪಲ್ಲಿ |
| 30 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಎಲ್ಲಮಪಲ್ಲಿ |
| 31 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಎಲ್ಲಮಪಲ್ಲಿ |
| 32 | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ಚಾಲುಮೇನಹಳ್ಳಿ |
| 33 | ಚಿಕ್ಕಬಳ್ಳಾಪುರ | ಚಿಂತಾಮಣಿ | ಚಿಂತಾಮಣಿ |
| 34 | ಚಿಕ್ಕಬಳ್ಳಾಪುರ | ಚಿಂತಾಮಣಿ | ಚಿಂತಾಮಣಿ |
| 35 | ಚಿಕ್ಕಬಳ್ಳಾಪುರ | ಚಿಂತಾಮಣಿ | ಗುಡುಮಾರಲಹಳ್ಳಿ |
| 36 | ಚಿಕ್ಕಬಳ್ಳಾಪುರ | ಚಿಂತಾಮಣಿ | ಹಿರೇಕಟ್ಟಿಗೆನಹಳ್ಳಿ |
| 37 | ಚಿಕ್ಕಬಳ್ಳಾಪುರ | ಚಿಂತಾಮಣಿ | ಹಿರೇಕಟ್ಟಿಗೆನಹಳ್ಳಿ |

| | | | |
|---|---|---|---|
| 38 | ಚಿಕ್ಕಬಳ್ಳಾಪುರ | ಚಿಂತಾಮಣಿ | ಪುಲ್‌ಗಿಂಡ್ಲಹಳ್ಳಿ |
| 39 | ಚಿಕ್ಕಬಳ್ಳಾಪುರ | ಚಿಂತಾಮಣಿ | ಸಿದ್ದೇಪಲ್ಲಿ |
| 40 | ಚಿಕ್ಕಬಳ್ಳಾಪುರ | ಗೌರಿಬಿದನೂರು | ಕೃಷ್ಣರಾಜಪುರ ತಾಂಡಾ |
| 41 | ಚಿಕ್ಕಬಳ್ಳಾಪುರ | ಗೌರಿಬಿದನೂರು | ಸಗನಹಳ್ಳಿ |
| 42 | ಚಿಕ್ಕಬಳ್ಳಾಪುರ | ಗೌರಿಬಿದನೂರು | ಸುಬ್ರಾಯನಹಳ್ಳಿ |
| 43 | ಚಿಕ್ಕಬಳ್ಳಾಪುರ | ಗೌರಿಬಿದನೂರು | ದೊಡ್ಡಗುರುಬರಹಳ್ಳಿ |
| 44 | ಚಿಕ್ಕಬಳ್ಳಾಪುರ | ಗೌರಿಬಿದನೂರು | ಗಂಗನಹಳ್ಳಿ |
| 45 | ಚಿಕ್ಕಬಳ್ಳಾಪುರ | ಗೌರಿಬಿದನೂರು | ಮಿಂಚನಹಳ್ಳಿ |
| 46 | ಚಿಕ್ಕಬಳ್ಳಾಪುರ | ಗುಡಿಬಂಡೆ | ಸೋಮೇನಹಳ್ಳಿ |
| 47 | ಚಿಕ್ಕಬಳ್ಳಾಪುರ | ಶಿಡ್ಲಘಟ್ಟ | ಬ್ರಹ್ಮನಹಳ್ಳಿ |
| 48 | ಚಿಕ್ಕಬಳ್ಳಾಪುರ | ಶಿಡ್ಲಘಟ್ಟ | ಬ್ರಹ್ಮನಹಳ್ಳಿ |
| 49 | ಚಿಕ್ಕಬಳ್ಳಾಪುರ | ಶಿಡ್ಲಘಟ್ಟ | ಸಡ್ಡಹಳ್ಳಿ |
| 50 | ಬೆಂಗಳೂರು (ಗ್ರಾ) | ದೇವನಹಳ್ಳಿ | ಅವಟ್ಟಿ |
| 51 | ಬೆಂಗಳೂರು (ಗ್ರಾ) | ದೇವನಹಳ್ಳಿ | ಅವಟ್ಟಿ |
| 52 | ಬೆಂಗಳೂರು (ಗ್ರಾ) | ದೇವನಹಳ್ಳಿ | ಗೊಡ್ಲು ಮುದ್ದೇನಹಳ್ಳಿ |
| 53 | ಬೆಂಗಳೂರು (ಗ್ರಾ) | ದೇವನಹಳ್ಳಿ | ಕೊಡಗುರ್ಕಿ |
| 54 | ಬೆಂಗಳೂರು | ಬೆಂಗಳೂರು | ಗೊಲ್ಲಹಳ್ಳಿ |
| 55 | ಬೆಂಗಳೂರು | ಬೆಂಗಳೂರು | ಗೊಲ್ಲಹಳ್ಳಿ |
| 56 | ಬೆಂಗಳೂರು | ಬೆಂಗಳೂರು | ಗೊಟ್ಟಿಗೆರೆ |
| 57 | ಬೆಂಗಳೂರು | ಬೆಂಗಳೂರು | ಗೊಟ್ಟಿಗೆರೆ |
| 58 | ಕೋಲಾರ | ಬಂಗಾರಪೇಟೆ | ಮಾಗೇರಿ |
| 59 | ಕೋಲಾರ | ಬಂಗಾರಪೇಟೆ | ರಾಮನಾಯಕನಹಳ್ಳಿ |
| 60 | ಕೋಲಾರ | ಬಂಗಾರಪೇಟೆ | ಸಿದ್ಧನಹಳ್ಳಿ |
| 61 | ಕೋಲಾರ | ಕೋಲಾರ | ಕೊಂಡರಾಜನಹಳ್ಳಿ |
| 62 | ಕೋಲಾರ | ಕೋಲಾರ | ಕೊಂಡರಾಜನಹಳ್ಳಿ |
| 63 | ಕೋಲಾರ | ಮಾಲೂರು | ತಿಮ್ಮನಾಯಕನಹಳ್ಳಿ |
| 64 | ಕೋಲಾರ | ಮುಳಬಾಗಿಲು | ಗಂಗನಹಳ್ಳಿ |
| 65 | ಕೋಲಾರ | ಮುಳಬಾಗಿಲು | ಹೊನಗಾನಹಳ್ಳಿ |
| 66 | ಕೋಲಾರ | ಶ್ರೀನಿವಾಸಪುರ | ಬಲತಮಾರಿ |
| 67 | ಕೋಲಾರ | ಶ್ರೀನಿವಾಸಪುರ | ಬಂತೋನಿಕಟವ |
| 68 | ಕೋಲಾರ | ಶ್ರೀನಿವಾಸಪುರ | ಚಿಕ್ಕವಾರಿಪಲ್ಲಿ |
| 69 | ಕೋಲಾರ | ಶ್ರೀನಿವಾಸಪುರ | ಚಿಕ್ಕವಾರಿಪಲ್ಲಿ |
| 70 | ಕೋಲಾರ | ಶ್ರೀನಿವಾಸಪುರ | ಕಡಿರಾಮಪಲ್ಲಿ |
| 71 | ಕೋಲಾರ | ಶ್ರೀನಿವಾಸಪುರ | ಮುಡಿಮಡಗು |
| 72 | ಕೋಲಾರ | ಶ್ರೀನಿವಾಸಪುರ | ಮುಡಿಮಡಗು |

9/3/22